# ದೀವಟಿಗೆ

ವಾರಪತ್ರಿಕೆ; ಸಂಪಾದಕ: ಸಿರಿಮನೆ ನಾಗರಾಜ್.


## ಶೃಂಗೇರಿಯಲ್ಲಿ ಶಸ್ತ್ರ ಚಿಕಿತ್ಸಾ ಶಿಬಿರ

ಶೃಂಗೇರಿ: ಇಲ್ಲಿನ ಶಾರದಾ ಧನ್ವಂತರಿ ಧರ್ಮಾರ್ಥ ಚಿಕಿತ್ಸಾಲಯದಲ್ಲಿ ಮೇ ೮ರಿಂದ ೧೫ರ ವರೆಗೆ ಉಚಿತ ಶಸ್ತ್ರಚಿಕಿತ್ಸಾ ಶಿಬಿರವನ್ನು ಏರ್ಪಡಿಸಿದೆ.

ಕಿವಿ-ಮೂಗು-ಗಂಟಲು, ಕಣ್ಣು, ಹಲ್ಲು, ಸ್ತ್ರೀರೋಗ ಮತ್ತು ಹೆರಿಗೆ ಶಸ್ತ್ರಚಿಕಿತ್ಸೆಗಳಲ್ಲದೆ ಹೊರ ರೋಗಿಗಳ ವಿಭಾಗದಲ್ಲಿ ಸಾಮಾನ್ಯ ಆರೋಗ್ಯ ಪರೀಕ್ಷೆಯನ್ನು ಸಹ ನಡೆಸಲಾಗುವುದು.


ಖಾಸಗಿ ಪ್ರಸಾರಕ್ಕಾಗಿ | ಕೊಪ್ಪ ೯-೫-೧೯೮೩ ಭಾನುವಾರ | ೧೭


### ಜಿಲ್ಲೆಯಿಂದ ವರ್ಗವಾಗಿರುವ ಜಿಲ್ಲಾಧಿಕಾರಿ

# ಮಹಿಷಿಯವರಿಗೆ ಆತ್ಮೀಯ ಬೀಳ್ಕೊಡುಗೆ

ಕೊಪ್ಪ: ಉದ್ಯೋಗ ಮತ್ತು ತರಬೇತಿ ನಿರ್ದೇಶಕರಾಗಿ ಬಡ್ತಿ ಹೊಂದಿ, ಬೆಂಗಳೂರಿಗೆ ವರ್ಗವಾಗಿ ಹೋಗುತ್ತಿರುವ ಜಿಲ್ಲಾಧಿಕಾರಿ ಪಿ. ಬಿ. ಮಹಿಷಿಯವರನ್ನು ಮೇ. ೬ ರಂದು ಇಲ್ಲಿ ನಡೆದ ಸರಳ ಸಮಾರಂಭವೊಂದರಲ್ಲಿ ಆತ್ಮೀಯವಾಗಿ ಬೀಳ್ಕೊಡಲಾಯಿತು.

ಸ್ಥಳೀಯ ಸಂಸ್ಥೆಗಳು, ತಾ॥ ಕಚೇರಿ ನೌಕರರು ಹಾಗೂ ಕೊಪ್ಪದ ನಾಗರಿಕರ ಪರವಾಗಿ ಈ ಸಮಾರಂಭ ಏರ್ಪಡಿಸಲಾಗಿತ್ತು. ಬಿ. ಜಿ. ಚಿದಂಬರ್ ಅಧ್ಯಕ್ಷತೆ ವಹಿಸಿದ್ದರು.

ಸ್ವಾಗತ ಭಾಷಣ ಮಾಡಿದ ತಹಸೀಲ್ದಾರ್ ಹೆಚ್. ಎಂ. ನಾಗಪ್ಪ, 'ಮಹಿಷಿಯವರದು ಶಾಂತ ಸ್ವಭಾವ. ಮಾತು ಕಮ್ಮಿ. ಆದರೆ ಕೆಲಸ ಚೊಕ್ಕಟವಾಗಿ ಆಗಬೇಕು. ಕೈ ಕೆಳಗಿನ ನೌಕರರೊಂದಿಗೆ ಯಾವಾಗಲೂ ಶಾಂತವಾಗಿಯೇ ನಡೆದುಕೊಳ್ಳುತ್ತಿದ್ದರು ಎಂದರು.

ಪುರಸಭಾ ಉಪಾಧ್ಯಕ್ಷ ಕೆ. ಜಿ. ಚಂದ್ರಶೇಖರ್ ಮಾತನಾಡಿ, ಮಹಿಷಿಯವರ ಸುಮಾರು ೨ ವರ್ಷದ ಆಡಳಿತಾವಧಿಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಒಳ್ಳೆ ಮಾರ್ಗದರ್ಶನ ನೀಡಿದರೆಂದರು.

ಗ್ರಾಮ ಪಂಚಾಯ್ತಿಗಳ ಅಧ್ಯಕ್ಷರುಗಳ ಪರವಾಗಿ ಮಾತನಾಡಿದ ಬೆಳವಿನಕೊಡಿಗೆ ಪಂಚಾಯ್ತಿ ಅಧ್ಯಕ್ಷ ವಾಸುದೇವಮೂರ್ತಿ, ಮಹಿಷಿಯವರ ನಿರ್ದೇಶನದಲ್ಲಿ ಗ್ರಾಮಗಳಲ್ಲಿ ಹಲವಾರು ಉಪಯುಕ್ತ ಯೋಜನೆಗಳು ತೀವ್ರಗತಿಯಲ್ಲಿ ಅನುಷ್ಠಾನಕ್ಕೆ ಬಂದಿವೆ. ಹಲವಾರು ಪಂಚಾಯ್ತಿಗಳು ನೂರಕ್ಕೆ ನೂರರಷ್ಟು ಕಂದಾಯ ವಸೂಲಿ ಮಾಡಿ ದಾಖಲೆ ಸ್ಥಾಪಿಸಿವೆ ಎಂದರು.

ಕೊಪ್ಪ ನಾಗರಿಕರ ಪರವಾಗಿ ಎ. ಮನೋಹರರಾವ್ ಮಾತನಾಡಿ, ಮಹಿಷಿಯವರ ಸರಳ ಸ್ವಭಾವವನ್ನೂ, ಎಷ್ಟೇ ಸಾಮಾನ್ಯರು ಹೋದರೂ ಅವರಿಗೆ ಸಂದರ್ಶನ ಕೊಟ್ಟು ಕುಂದುಕೊರತೆ ವಿಚಾರಿಸುತ್ತಿದ್ದುದನ್ನೂ ಸ್ಮರಿಸಿದರು.

ತಾ॥ ಅಭಿವೃದ್ಧಿ ಮಂಡಳಿಗಳು ಮತ್ತಿತರ ಸ್ಥಳೀಯ ಸಂಸ್ಥೆಗಳಿಗೆ ಮತ್ತು ಕೈ ಕೆಳಗಿನ ಅಧಿಕಾರಿಗಳಿಗೆ ಮಹಿಷಿಯವರು ಕೊಡುತ್ತಿದ್ದ ಸರ್ವತೋಮುಖ ಪ್ರೋತ್ಸಾಹವನ್ನು ನೆನೆದ ಚಿದಂಬರ್‌ರವರು (ಆಸೀ ಪುಟಕ್ಕೆ)

## ಕೊಪ್ಪ ಪಶುವೈದ್ಯ ಶಾಲೆಗೆ ಸಂಚಾರಿ ಆಸ್ಪತ್ರೆ

ಕೊಪ್ಪ: ಇಲ್ಲಿನ ತಾಲೂಕು ಪಶುವೈದ್ಯ ಆಸ್ಪತ್ರೆಗೆ ೧ ಲಕ್ಷ ೨೦ ಸಾವಿರ ರೂ. ವೆಚ್ಚದ "ಸಂಚಾರಿ ಆಸ್ಪತ್ರೆ"ಯೊಂದು ಸೇರ್ಪಡೆಯಾಗಿದೆ. ಚಿಕಿತ್ಸೆಗೆ ಬೇಕಾದ ವ್ಯವಸ್ಥೆಯ ಜೊತೆಗೆ ಪ್ರಚಾರ ಹಾಗೂ ಕಿರು ಚಲನ ಚಿತ್ರ ಪ್ರದರ್ಶನಗಳಿಗೆ ಬೇಕಾದ ಸಲಕರಣೆಗಳನ್ನ ಈ ವಾಹನ ಹೊಂದಿದೆ.

ಇದಕ್ಕೆ ಬೇಕಾದ ವೈದ್ಯರ ಹುದ್ದೆ ಇಷ್ಟರಲ್ಲೇ ಮಂಜೂರಾಗುವ ನಿರೀಕ್ಷೆಯಿದ್ದು, ಸದ್ಯಕ್ಕೆ ಇಲ್ಲಿನ ಪಶುವೈದ್ಯರಾದ ಡಾ॥ ಸಿ. ಎಸ್. ಪಾರ್ಥಸಾರಥಿಯವರೇ ಸಂಚಾರಿ ಆಸ್ಪತ್ರೆಯ ನಿರ್ವಹಣೆಯನ್ನೂ ನೋಡಿಕೊಳ್ಳುತ್ತಿದ್ದಾರೆ. ಪ್ರತ್ಯೇಕ ವೈದ್ಯರ ನೇಮಕವಾದರೆ ತಾಲೂಕಿನ ಹಳ್ಳಿಗಳ ಒಹು ದಿನಗಳ ಅಗತ್ಯವೊಂದು ಪೂರೈಸಿದಂತಾಗುತ್ತದೆ.

## ಮುಜರಾಯಿ ಇಲಾಖೆಯ ಎಲ್ಲಾ ನೌಕರರಿಗೂ ೧೦೦ ರೂ. ಸಂಬಳ

### ಮುಖ್ಯ ಮಂತ್ರಿ ಘೋಷಣೆ

ಕಿಗ್ಗ: ರಾಜ್ಯದ ಎಲ್ಲಾ ಮುಜರಾಯಿ ದೇವಾಲಯಗಳ ನೌಕರರಿಗೆ ತಿಂಗಳಿಗೆ ೧೦೦ ರೂ. ಗೆ ಕಮ್ಮಿಯಿಲ್ಲದಂತೆ ವೇತನ ನೀಡುವುದಾಗಿ ಮುಖ್ಯಮಂತ್ರಿ ಗುಂಡೂರಾವ್ ಘೋಷಿಸಿದ್ದಾರೆ.

ಅವರು ಮೇ ೫ ರಂದು ಇಲ್ಲಿನ ಋಷ್ಯಶೃಂಗ ದೇವಾಲಯದಲ್ಲಿ ರುದ್ರಹೋಮದಲ್ಲಿ ಪಾಲ್ಗೊಂಡು ಮಾತನಾಡುತ್ತಿದ್ದರು.

ಇಲ್ಲಿನ ಅರ್ಚಕರು ಸಲ್ಲಿಸಿದ ಮನವಿ ಸ್ವೀಕರಿಸಿ ಉತ್ತರಿಸಿದ ರಾವ್, ಕಿರಿ ವೇತನ ಪಡೆಯುತ್ತಿರುವ ಅರ್ಚಕರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸಿದರು.

### ಕಿಗ್ಗ ದೇವಸ್ಥಾನದ ಜೀರ್ಣೋದ್ಧಾರಕ್ಕೆ

## ಲಕ್ಷ ರೂ. ಭರವಸೆ

ಕಿಗ್ಗ: ಇಲ್ಲಿನ ಋಷ್ಯಶೃಂಗ ದೇವಾಲಯದ ಜೀರ್ಣೋದ್ಧಾರಕ್ಕೆ ಒಂದು ಲಕ್ಷ ರೂ. ಗಳನ್ನು ಸರ್ಕಾರ ನೀಡುವುದಾಗಿ ಮುಖ್ಯಮಂತ್ರಿ ಆರ್. ಗುಂಡೂರಾವ್ ಘೋಷಿಸಿದ್ದಾರೆ.

ಅವರು ಮೇ ೫ ರಂದು ಇಲ್ಲಿನ ಋಷ್ಯಶೃಂಗ ದೇವಾಲಯದಲ್ಲಿ ಧರ್ಮದರ್ಶಿ ಸಮಿತಿ ಸಲ್ಲಿಸಿದ ಮನವಿಗೆ ಉತ್ತರಿಸಿ ಮಾತನಾಡುತ್ತಿದ್ದರು.

ಮನವಿಯಲ್ಲಿ ಕೋರಲಾಗಿದ್ದಂತೆ ಸ್ವಾಮಿಯ ರಥ ನಿರ್ಮಾಣಕ್ಕೆ ಬೇಕಾದ ಜಾತಿಯ ಮರ ಮಂಜೂರು ಮಾಡುವುದಾಗಿ ತಿಳಿಸಿದ ಅವರು ಮತ್ತು ಕಾಮಗಾರಿಗೆ ಐದು ನೂರು ಮೂಟೆ ಸಿಮೆಂಟ್ ನೀಡುವುದಾಗಿ ಆಶ್ವಾಸನೆ ಇತ್ತರು. (ಆಸೀ ಪುಟಕ್ಕೆ)

## ಕಿಡಿ ಹಾರಿತು, ಕಿಚ್ಚು ಹೊತ್ತಲಿಲ್ಲ....

ಕೊಪ್ಪ: ತಾಲೂಕು ರೈತ ಸಂಘ ಏ. ೨೮ ರಿಂದ ತಾ॥ ಕಚೇರಿಯ ಪಿಕೆಟಿಂಗ್ ಪ್ರಾರಂಭಿಸಿ, ರೈತ ಚಳುವಳಿಗೆ ಚಾಲನೆ ಕೊಡಲು ಯೋಜನೆ ಹಾಕಿತ್ತು. ಇದು ಜಿಲ್ಲೆಯಲ್ಲೇ ರೈತ ಚಳುವಳಿಯ ಕಿಚ್ಚು ಹಚ್ಚುವ ಕಿಡಿಯಾಗಬಹುದೆಂದು 'ದೀವಟಿಗೆ'ಯ ನಿರೀಕ್ಷೆಯಾಗಿತ್ತು.

ಆದರೆ ಘಟ್ಟದಿಂದ ಡೀಸೆಲ್ ಅಭಾವ ತಲೆದೋರಿತು. ಜನಸಂಪರ್ಕವೇ ಅಸಾಧ್ಯವಾಯಿತು. ಚಳುವಳಿ ಮುಂದೆ ಹಾಕುವುದು ಅನಿವಾರ್ಯವಾಯಿತು.

ಮೇ ೩ ರಿಂದ ಚಳುವಳಿ ಪ್ರಾರಂಭಿಸಲು ರೈತ ಸಂಘದ ಕಾರ್ಯಕರ್ತರು ವ್ಯಾಪಕವಾಗಿ ಪ್ರಚಾರ ನಡೆಸಿದರು. ರಾತ್ರಿ-ಹಗಲು ಓಡಾಡಿದರು. ಅಂದು ತಾಲೂಕಿನ ಬೇರೆ ಬೇರೆ ಕಡೆಗಳ ಸುಮಾರು ೮೦ ಕ್ಕೂ ಹೆಚ್ಚು ರೈತರು ತಾ॥ ಕಚೇರಿಗೆ ಮೆರವಣಿಗೆ ಹೋಗಿ, ತಹಸೀಲ್ದಾರರಿಗೆ ತಮ್ಮ ಬೇಡಿಕೆ ಕುರಿತ ಮನವಿ ಸಲ್ಲಿಸಿದರು.

ಕಿಡಿಯೇನೋ ಹಾರಿತು. ಕಿಚ್ಚು ಹೊತ್ತಲಿಲ್ಲ. ಕಾಡು ಒಣಗಿದ್ದು ಸಾಲದೋ, ಕಿಡಿಯಲ್ಲಿ ಸತ್ವ ಸಾಲದೋ, ರೈತ ಕಾರ್ಯಕರ್ತರು ಆಲೋಚಿಸಬೇಕಾಗಿದೆ.

## ಅಧ್ಯಾಪಕರಿಂದ ೧೦ ವರ್ಷದ ಬಾಲಕಿಯ ಮೇಲೆ ಅತ್ಯಾಚಾರ

ಹೆಣ್ಣು-ಗಂಡುಗಳ ಸಂಬಂಧವಾಗಿ ಯಾವತ್ತೂ ಸಮಾಜದಲ್ಲಿ ಚರ್ಚೆ ನಡೆದಿದೆ. ಆದರೆ ಹೆಣ್ಣು-ಗಂಡುಗಳ ಪರಸ್ಪರ ಒಪ್ಪಿಗೆ ಇಲ್ಲದೆ, ಅದರಲ್ಲೂ ಅಪ್ರಾಪ್ತ ವಯಸ್ಸಿನ ಬಾಲಕಿಯ ಮೇಲೆ, ನಡೆಸುವ ರಾಕ್ಷಸೀಯ ಲೈಂಗಿಕ ದಾಳಿಯು ಅತ್ಯಾಚಾರವೂ ಶಿಕ್ಷಾರ್ಹ ಅಪರಾಧವೂ ಆಗುತ್ತದೆ. ಇಂಥದೊಂದು ಘಟನೆ ತಾ. ೧೨-೩-೮೩ ರಂದು ಭದ್ರಾವತಿಯ ಬಡಾವಣೆಯೊಂದರಲ್ಲಿ ನಡೆದು ಹೋಗಿದ್ದರೂ ಅದನ್ನು ಸುದ್ದಿಯಾಗದಂತೆ ಮುಚ್ಚಿ ಹಾಕುವ ಯತ್ನ ನಡೆದಿದೆ. ದಲಿತ ಸಂಘರ್ಷ ಸಮಿತಿಯ ಭದ್ರಾವತಿ ಶಾಖೆ ಈ ಘಟನೆಯನ್ನು ಬೆಳಕಿಗೆ ತಂದಿದ್ದು, ಅದರ ಪ್ರಕಟಣೆಯ ಪೂರ್ಣ ಪಾಠ ಇಲ್ಲಿದೆ.

### ಘಟನೆ

ಭದ್ರಾವತಿ ಹಳೆನಗರದ ರಾಘವೇಂದ್ರ ಮಠದ ಬಡಾವಣೆಯಲ್ಲಿ ವಾಸವಾಗಿರುವ ಸರ್ ಎಂ. ವಿಶ್ವೇಶ್ವರಯ್ಯ ಕಾಲೇಜಿನ ಕಾಮರ್ಸ್ ವಿಭಾಗದ ಅಧ್ಯಾಪಕ ಕೆ. ವಿ. ಕೃಷ್ಣಮೂರ್ತಿ ಎಂಬವರು ಕಳೆದ ಕೆಲವು ವರ್ಷಗಳಿಂದ ಕಾನೂನುಬಾಹಿರವಾಗಿ ಕಾಲೇಜು ವಿದ್ಯಾರ್ಥಿಗಳಿಗೆ ಪ್ರೈವೇಟ್ ಟ್ಯೂಷನ್ ಮಾಡುತ್ತಿದ್ದರು. ಟ್ಯೂಷನ್ ಕೊಠಡಿ ಪಕ್ಕದಲ್ಲಿ ಸದ್ಗೃಹಸ್ಥ ಬ್ರಾಹ್ಮಣ ವಿಧವೆಯೊಬ್ಬರ ಮನೆ. ಆಕೆಗೆ ಪ್ರಾಥಮಿಕ ಶಾಲೆಯಲ್ಲಿ ಓದುವ ಒಬ್ಬ ಮಗಳು. ಹೆಸರು ಜಯಶ್ರೀ. ಲಕ್ಷಣವಾದ ಹುಡುಗಿ. ಅಧ್ಯಾಪಕರಿಗೆ ಮನೆಯಲ್ಲಿ ಹೆಂಡತಿ-ಮಕ್ಕಳು ಇದ್ದಾಗ್ಯೂ ಈ ಪುಟ್ಟ ಬಾಲಕಿಯ ಮೇಲೆ ಕಣ್ಣು. ಹೋಗುತ್ತ ಬರುತ್ತ ಕೆನ್ನೆ ಚಿವುಟುವುದು ಇತ್ಯಾದಿ ಮಾಡುತ್ತಿದ್ದರು.

ತಾ॥ ೧೨-೩-೮೩ ಶುಕ್ರವಾರ ಸಂಜೆ ಸುಮಾರು ೬ ಘಂಟೆ. ವಿದ್ಯಾರ್ಥಿಗಳು ಟ್ಯೂಷನ್ ಮುಗಿಸಿಕೊಂಡು ಹೋಗಿದ್ದರು. ಈ ಚಿಕ್ಕ ಮಗು ತನ್ನ ಮನೆಯ ಮುಂದೆ ನಿಂತಿದ್ದಳು. ಅಧ್ಯಾಪಕರು ಅವಳ ಬಳಿ ಬಂದು "ಇಂದು ನಾವು ಸರಸ್ವತಿ ಪೂಜೆ ಮಾಡಿದ್ದೇವೆ. ನೀನೂ ಬಾ ಸರಸ್ವತಿ ನಿನಗೆ ಒಳ್ಳೆ ಬುದ್ಧಿ ಕೊಡುತ್ತಾಳೆ" ; "ತಿಂಡಿ ಕೊಡುತ್ತೇನೆ" ಮುಂತಾಗಿ ಪುಸಲಾಯಿಸಿ ಕೊಠಡಿಗೆ ಕರೆದುಕೊಂಡು ಹೋದರು. ಅಲ್ಲಿ ಮಗುವಿಗೆ "ಸ್ವಲ್ಪ ಕೊಠಡಿಯ ಕಸ ಗುಡಿಸು" ಎಂದರು. ಮಗು ಕಸ ಗುಡಿಸುತ್ತಿದ್ದಂತೆ ಹಿಂದುಗಡೆಯಿಂದ ಕೊಠಡಿಯ ಬಾಗಿಲನ್ನು ಮುಚ್ಚಿದರು. ಬೆಚ್ಚಿದ ಮಗು ಸ್ವಲ್ಪ ಭಯಪಟ್ಟಿತು. ಕಿರುಚಿದರೂ ಬಿಡದೆ ಕರವಸ್ತ್ರದಿಂದ ಬಾಯಿಯನ್ನು ಭದ್ರವಾಗಿ ಮುಚ್ಚಿ ಬೆಂಚಿನ ಮೇಲೆ ಮಲಗಿಸಿ ಅತ್ಯಾಚಾರ ಮಾಡಿದರು. ಗದ್ದಲವಾಗಲು ಪಕ್ಕದ ಮನೆಯವರು ಕೇಳಲು ಕೊಠಡಿ ಹಿಂದಿನ ಬಾಗಿಲು ತೆರೆದರು. ಎಚ್ಚರಗೊಂಡ ಅಧ್ಯಾಪಕ "ಯಾರಿಗೂ ಹೇಳಕೂಡದೆಂದು" ಮಗುವಿಗೆ ಬೆದರಿಸಿ ಹಿಂದಿನ ಬಾಗಿಲಿನಿಂದ ಹೊರಗೆ ಕಳಿಸಿದರು. (ಆಸೀ ಪುಟಕ್ಕೆ)

## ಓದುಗರ ಪತ್ರಗಳು

# ಪ್ರಥಮ ದರ್ಜೆ ಕಾಲೇಜು; ತೃತೀಯ ದರ್ಜೆ ಶಿಕ್ಷಣ?

ಕೊಪ್ಪದಲ್ಲೊಂದು ಹೊಸ ಪ್ರಥಮ ದರ್ಜೆ ಕಾಲೇಜು ಶುರುವಾಗುತ್ತೆಂದು ತಿಳಿದು ಈ ಸುತ್ತಲಿನ ಅನೇಕ ಪೋಷಕರು ನಿಟ್ಟುಸಿರು ಬಿಟ್ಟಿರಬಹುದು; ಶ್ರೀಮಂತ ಯುವಕರು ಮತ್ತವರ ಚಮಚಾಗಳ ಕಲ್ಪನೆಗಳು ಗರಿಗೆದರಲಣಿಯಾಗುತ್ತಿರಬಹುದು.

ಆದರೆ ಇಂಥದೊಂದು ಕಾಲೇಜು ನಮಗೆ ನಿಜವಾಗಿ ಅಗತ್ಯವೆಂಬುದನ್ನು ನಾವು ಯೋಚಿಸಿ, ಅರ್ಥಮಾಡಿಕೊಂಡು ಮುಂದುವರಿಯಬೇಕು. ನಮ್ಮಲ್ಲಿನ ಅಮಾಯಕ ಪೋಷಕರ ದೃಷ್ಟಿಯಿಂದ, ಸ್ವಂತ ಕಾಲಮೇಲೆ ನಿಂತು, ತಮ್ಮದೇ ಒಂದು ಗೂಡು ಕಟ್ಟಬಯಸುವ ಸಹಸ್ರ ಸಂಖ್ಯೆಯ ಯುವಜನರ ದೃಷ್ಟಿಯಿಂದ, ಈ ಬಗ್ಗೆ ಯೋಚಿಸುವುದು ಅನಿವಾರ್ಯ.

ಮುಖ್ಯವಾಗಿ, ಮುಂದೆ ಒಂದು ಉದ್ಯೋಗ ಸಿಗುತ್ತದೆಂಬ ಕಾರಣದಿಂದ ನಾವು ಕಾಲೇಜಿಗೆ ಹೋಗುತ್ತಿರುವುದು ತಾನೆ? ಹೀಗೆ ಸಿಗುವ ಉದ್ಯೋಗಗಳು ಸುಮಾರಾಗಿ, ಮೊದಲೇ ಸಿದ್ಧೆ ಬರುವವರಿಗೆ ಹಾಕಿಕೊಟ್ಟ ಹಾಸಿಗೆಯಂತಿರುತ್ತವೆ ಎಂಬುದರಿಂದಲೇ ಕಾಲೇಜು ಶಿಕ್ಷಣಕ್ಕೆ ಇಂಥ ನೂಕು ನುಗ್ಗಲು ಉಂಟಾಗಿದೆ. ಆದರೆ, ವಸ್ತುಸ್ಥಿತಿ ಎಂದರೆ ಹಣ, ಪ್ರಭಾವ ಇತ್ಯಾದಿಗಳಿಲ್ಲದವರಿಗೆ ಕೆಲಸ ಸಿಗುವುದು ಲಾಟರಿಯಲ್ಲಿ ದುಡ್ಡು ಬರುವಷ್ಟೇ ಖಚಿತವಾದ ವಿಷಯ. ಆದರೂ, ಯಾಕೋ ಏನೋ ನಮ್ಮ ಯುವಜನರು, ಅವರ ತಾಯಿ-ತಂದೆಯರು ನೌಕರಿಯ ಬಿಸಿಲುಗುದುರೆಯ ಬೆನ್ನು ಹತ್ತಿಬಿಟ್ಟಿದ್ದಾರೆ. ನಮ್ಮ ರಾಜಕಾರಣಿಗಳು ಕಾಲೇಜು ವಿದ್ಯಾಭ್ಯಾಸವೆಂಬ ತುಪ್ಪವನ್ನು ಜನರ ಮೂಗಿಗೆ ಸವರಿ ಮಜಾ ನೋಡುತ್ತಿದ್ದಾರೆ.

ಆದರೆ ಸದ್ಯದ ಕಾಲೇಜು ಶಿಕ್ಷಣದ ಒಂದೆರಡು ಪ್ರಮುಖ ಅಪಾಯಗಳನ್ನು ನಾವು ಅರ್ಥಮಾಡಿಕೊಳ್ಳಬೇಕು.

೧. ಸುಮಾರಾಗಿ ಪಿ.ಯು.ಸಿ. ದಾಟಿದ ಪ್ರತಿಯೊಬ್ಬನಿಗೂ ದೈಹಿಕ ದುಡಿಮೆ, ಅದರಲ್ಲೂ ಗದ್ದೆ, ತೋಟಗಳಲ್ಲಿ ದುಡಿಯುವುದು ಅವಮಾನಕರವಾಗಿ ಕಾಣುವಂತೆ ನಮ್ಮ ಶಿಕ್ಷಣ ಮಾಡಿದೆ. ಅಂದರೆ ಮಾನವ ಬದುಕಿನ ಅತ್ಯಂತ ಶ್ರೇಷ್ಠ ಮೌಲ್ಯಗಳಲ್ಲೊಂದಾದ ಪ್ರಾಮಾಣಿಕ ದೈಹಿಕ ದುಡಿಮೆಯನ್ನು ತುಚ್ಛೀಕರಿಸುವ ಮೂಲಕ ಇವೊತ್ತಿನ ಕಾಲೇಜಿನ ಶಿಕ್ಷಣ ಇಡೀ ಜನಾಂಗವನ್ನೇ ಸೋಮಾರಿ ಜನಾಂಗವಾಗಿಸಿದೆ.

೨. ಕಾಲೇಜು ಶಿಕ್ಷಣ, ಸಮಸ್ಯೆಯಿಂದ ಸದ್ಯಕ್ಕೆ ತಪ್ಪಿಸಿಕೊಳ್ಳುವ ಅತ್ಯಂತ ಉಪಯುಕ್ತ ಸಾಧನವಾಗಿಬಿಟ್ಟಿದೆ. ಪಿ. ಯು. ಸಿ ಆದ ಕೂಡಲೇ ಥಟ್ಟೆಂದು ಎದುರು ನಿಲ್ಲುವ 'ಮುಂದೇನು' ಎಂಬ ಪ್ರಶ್ನೆಗೆ, ಕಾಲೇಜು ಮೂರು ವರ್ಷಗಳ ಪುರುಸೊತ್ತು ಕೊಡುತ್ತದೆ. ಇದರಿಂದ ಸದ್ಯದ ಉಪಶಮನ ಸಿಕ್ಕುವುದು ನಿಜವಾದರೂ, ನಂತರದ ಪರಿಣಾಮ ಮತ್ತೂ ಭೀಕರವಾಗುತ್ತ ಹೋಗುತ್ತದೆ.

೩. ಅಲ್ಲಿ ಇಲ್ಲಿ ಆಫೀಸುಗಳಲ್ಲಿ ಲೆಕ್ಕ ಬರೆಯುವುದನ್ನು ಬಿಟ್ಟರೆ, ಬೇರೆ ಯಾವುದಕ್ಕೂ ಪ್ರಯೋಜನವಿಲ್ಲದ ವಿದ್ಯೆ, ನೇರ ಬದುಕಿಗೆ ಯಾವ ರೀತಿಯಲ್ಲೂ ಸಂಬಂಧವಿಲ್ಲದ ವಿದ್ಯೆ–ಕಾಲೇಜು ಶಿಕ್ಷಣ.

ಕಾರಣಗಳನ್ನು ಇನ್ನೂ ಪಟ್ಟಿಮಾಡಬಹುದು. ಸದ್ಯಕ್ಕೆ ಬೇಡ. ಕೊಪ್ಪದ ಹಿರಿಯರು, ಪ್ರಥಮ ದರ್ಜೆ ಕಾಲೇಜಿನಕಿಂತ, ಒಂದು ಪಾಲಿಟೆಕ್ನಿಕ್ ಕಾಲೇಜನ್ನೋ, ಐಟಿಐ ನಂತಹ ವೃತ್ತಿ ತರಬೇತಿ ಕೇಂದ್ರವನ್ನೋ, ಮುಖ್ಯಮಂತ್ರಿಗಳಲ್ಲಿ ಯಾಕೆ ಕೇಳಲಿಲ್ಲವೋ ನನಗೆ ಅರ್ಥವಾಗಿಲ್ಲ. ಬಹುಶಃ ಹಾಗೆ ಕೇಳಿದವರು, ಸ್ವಲ್ಪ ಹೊತ್ತು ಸುಮ್ಮನೆ ಕೂತು ಈ ಪ್ರಶ್ನೆಯನ್ನು ಕೇಳಿಕೊಂಡರೆ ಅವರಿಗೂ ಉತ್ತರ ಸಿಗುವುದಿಲ್ಲ. ಯಾಕೆಂದರೆ ನಮ್ಮೆಲ್ಲರ ಮೆದುಳುಗಳೂ ಕ್ಯಾಸೆಟ್ಟಿನೊಳಗಿನ ಟೇಪುಗಳ ಹಾಗೆ ಆಡಿದ್ದನ್ನೇ ಆಡುತ್ತವೆ; ಹಾಡಿದ್ದನ್ನೇ ಹಾಡುತ್ತವೆ. ಹಾಗಿಲ್ಲದಿದ್ದರೆ, ತೀರ್ಥಹಳ್ಳಿ, ಶೃಂಗೇರಿಗಳಲ್ಲಿ ಈಗಾಗಲೇ ಇರುವ ಪ್ರಥಮ ದರ್ಜೆ ಕಾಲೇಜು ನಮಗೂ ಯಾಕೆ ಬೇಕಾಗಿತ್ತು?

ಮುಖ್ಯವಾಗಿ ಇನ್ನೂ ಮಕ್ಕಳನ್ನು ಕಾಲೇಜಿಗೆ ಕಳಿಸಲಿಚ್ಛಿಸುವ ಪೋಷಕರು ತಾವು ೧೫ ವರ್ಷಗಳ ಕಾಲ ಸರಾಸರಿ ತಿಂಗಳಿಗೆ ಇನ್ನೂರು ರೂ.ನಷ್ಟು ತಮ್ಮ ಮಕ್ಕಳ ವಿದ್ಯೆಯ ಮೇಲೆ ಹೂಡುವ ಬಂಡವಾಳ ತಿರುಗಿ ಬಂದೀತೆ ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕು. ಕಾಲೇಜಿಗೆ ಹೋಗಬಯಸುವ ವಿದ್ಯಾರ್ಥಿಗಳು - ಇವರೆಲ್ಲ ಸಾಕಷ್ಟು ಬೆಳೆದವರಾದ್ದರಿಂದ, - ತಮ್ಮ ತಂದೆತಾಯಿಗಳ ಹಣವನ್ನು ತಾವು ಹೀಗೆ ಬಳಸಿಕೊಳ್ಳುವುದು ಸರಿಯೆ, ತಮ್ಮ ಮನುಷ್ಯನ ಮರಳಿ ಬಾರದ ಅತ್ಯಂತ ಸೃಷ್ಟಿಶೀಲವಾದ ಹಂತವನ್ನು ಕಾಲೇಜಿನಲ್ಲಿ ಕೂತು ಹರಟೆ ಕಳೆದುಬಿಡುವುದು ಸಾಧುವೆ ಇತ್ಯಾದಿ ಪ್ರಶ್ನೆಗಳನ್ನು ಇನ್ನೊಮ್ಮೆ ಕೇಳಿಕೊಂಡು ಉತ್ತರ ಹುಡುಕಬೇಕು.

ನಮ್ಮ ಮುಖಂಡರು ಇಂಥ ಕಾಲೇಜಿಗಿಂತ, ಬೇರೆ ಏನನ್ನಾದರೂ - ಮೊದಲೇ ಹೇಳಿದಂತೆ - ಪಾಲಿಟೆಕ್ನಿಕ್‌ನಂಥ ಸಮಾರಾಗಿಯಾದರೂ ಪ್ರಯೋಜನವಾಗುವ ಕಾಲೇಜುಗಳನ್ನು - ಊರಿಗೆ ತರಲು ಸಾಧ್ಯವಿಲ್ಲವೆ ಎಂದು ಯೋಚಿಸಬೇಕು

ಕೊಪ್ಪ — ಎಚ್. ಸುಂದರ ರಾವ್

## ದಯಂಬಳ್ಳಿಗೆ ಅಂಚೆ ಕಚೇರಿ ಬೇಕು

ಮಾನ್ಯರೆ,

ಕೊಪ್ಪ ತಾ|| ದಯಂಬಳ್ಳಿ, ಕಿಕ್ರೆ ಮತ್ತು ಕೋಳೂರು ಗ್ರಾಮಗಳಲ್ಲಿ ಸುಮಾರು ೩ ಸಾವಿರ ಜನರು ವಾಸವಾಗಿದ್ದು, ಈ ಪೈಕಿ ಸುಮಾರು ಮೂರರಲ್ಲೊಂದು ಭಾಗದಷ್ಟು ಜನ ಹರಿಜನ-ಗಿರಿಜನರಾಗಿದ್ದಾರೆ. ಈ ಪ್ರದೇಶವು ಹಿಂದುಳಿದ 'ಟ್ರೈಬಲ್ ಏರಿಯಾ' ಆಗಿದ್ದು, ಇತ್ತೀಚೆಗೆ ಸರ್ಕಾರದ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅನ್ವಯ ಹಲವಾರು ಅಭಿವೃದ್ಧಿಗಳಾಗಿವೆ. ಆದರೆ ಈ ಮೂರು ಗ್ರಾಮಗಳ ಕೇಂದ್ರ ಪ್ರದೇಶವಾದ ದಯಂಬಳ್ಳಿಗೆ ಅಂಚೆ ಸೌಕರ್ಯವಿಲ್ಲ. ಈ ಬಗ್ಗೆ ೧೦ ವರ್ಷಗಳಿಂದಲೂ ಸಂಬಂಧಪಟ್ಟ ಅಧಿಕಾರಿಗಳ ಮೂಲಕ ಸರ್ಕಾರದ ಗಮನಕ್ಕೆ ತಂದರೂ ಕೂಡ ಇದುವರೆಗೂ ಏನೂ ಪ್ರಯೋಜನವಾಗಿಲ್ಲ. ಈ ಪ್ರದೇಶಕ್ಕೆ ೩ ಕಿ. ಮೀ. ಒಳಗಡೆ ಅಂಚೆ ಕಚೇರಿ ಇಲ್ಲದಿರುವುದರಿಂದಲೂ, ಟ್ರೈಬಲ್ ಏರಿಯಾ ಆಗಿರುವುದರಿಂದಲೂ ಈ ಕಡೆ ಸರ್ಕಾರದವರು ಗಮನ ಹರಿಸಿ, ೧೦ ವರ್ಷಗಳ ಬೇಡಿಕೆಯಾದ ದಯಂಬಳ್ಳಿಗೆ ಅಂಚೆ ಕಚೇರಿಯನ್ನು ಮಂಜೂರು ಮಾಡಿಸಿ, ಈ ಮೂರೂ ಗ್ರಾಮಗಳ ಜನರಿಗೆ ಅನುಕೂಲ ಮಾಡಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

ದಯಂಬಳ್ಳಿ —ಗ್ರಾಮಸ್ಥರು

## ಮೋರಿಯ ಸ್ವಚ್ಛತೆ: ಒಂದು ವಿವರಣೆ

ಮಾನ್ಯರೆ,

ಕೊಪ್ಪದ ಮುಖ್ಯರಸ್ತೆಯಲ್ಲಿನ ಮೋರಿಯ ಬಗ್ಗೆ ಓದುಗರೊಬ್ಬರ ಪತ್ರಕ್ಕೆ ಎಂ. ಎಸ್. ಗಣೇಶ್ ಎಂಬುವರು ಪ್ರತಿಕ್ರಿಯೆ ಬರೆಯುತ್ತ ಮಂತ್ರಿಗಳು ನಿಂತು ಮೋರಿಯನ್ನು ಸ್ವಚ್ಛಗೊಳಿಸಬೇಕೆಂದು ಅವರು ಹೇಳಿದ್ದಾರೆಂದು ಬರೆದಿದ್ದಾರೆ. ಆದರೆ ಅವರು ಹಾಗೆ ಹೇಳಿಲ್ಲ. ಪುರಸಭೆಗೆ ಎಷ್ಟೇ ಅರ್ಜಿಕೊಟ್ಟರೂ ರಿಪೇರಿಯಾಗಿಲ್ಲ. ಸಾಮಾನ್ಯವಾಗಿ ಮಂತ್ರಿಗಳು ಬರುತ್ತಾರೆಂದರೆ ರಸ್ತೆ, ಮೋರಿಗಳೆಲ್ಲ ರಿಪೇರಿಯಾಗಿಬಿಡುತ್ತವೆ. ಆದರೆ ಈ ರಸ್ತೆಯಲ್ಲಿ ಮಂತ್ರಿಗಳು ಪದೇ ಪದೇ ಓಡಾಡಿದರೂ ಈ ಮೋರಿ ಮಾತ್ರ ರಿಪೇರಿಯಾಗಿಲ್ಲ ಎಂದು ಪತ್ರದ ಅಭಿಪ್ರಾಯ. ಇದರಲ್ಲಿ ಮಂತ್ರಿಗಳೇ ನಿಂತು ತೆಗೆಸಬೇಕೆಂಬ ಅರ್ಥ ಎಲ್ಲಿ ಬರುತ್ತದೆ? ಒಂದು ಅಭಿಪ್ರಾಯವನ್ನು ಖಂಡಿಸುವ ಮೊದಲು ಅದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದು ಒಳ್ಳೆಯದಲ್ಲವೆ?

ಕೊಪ್ಪ —ಶಂಕರರಾವ್

# ಬಾಲಕಿಯ ಮೇಲೆ ಅತ್ಯಾಚಾರ

(ಒಂದನೇ ಪುಟದಿಂದ)

ಕೆನ್ನೆಗಳೆಲ್ಲ ಪರಚಿ, ತೊಡೆಗಳು ಬಾತು ಹೋಗಿ ರಕ್ತಸ್ರಾವವಾಗುತ್ತಿದ್ದ ಮಗು ತಾಯಿಯ ಹತ್ತಿರ ಬಂದು ಗೋಳಿಟ್ಟಿತು. ಈ ಸಮಯಕ್ಕೆ ಆಪದ್ಬಂಧುವಾಗಿ ಒದಗಿದವರು ಶ್ರೀಮತಿ ಪದ್ಮಾ ಟೀಚರ್. ಅವರ ಮನೆಯಲ್ಲಿ ಕೆಲಸ ಮಾಡುತ್ತಿದ್ದ ವಿಧವೆ ಮಗುವನ್ನು ಕರೆದುಕೊಂಡು ಅವರ ಮನೆಗೆ ಹೋಗಿ ಅಧ್ಯಾಪಕನ ಲೀಲೆಯನ್ನು ವಿವರಿಸಿ ಗೋಳಿಟ್ಟರು. ಪದ್ಮಾಟೀಚರ್‌ರವರು ಮಗುವಿಗೆ ಮನೆಯಲ್ಲಿಯೇ ಸ್ವಲ್ಪ ಕಾಲ ಶುಶ್ರೂಷೆ ಮಾಡಿ ತರುವಾಯ ಹತ್ತಿರದ ನಿರ್ಮಲ ಆಸ್ಪತ್ರೆಗೆ ಕೊಂಡೊಯ್ದರು. ಅಲ್ಲಿ ಮಗುವಿಗೆ ಡ್ರಿಪ್ಸ್ ಹಾಕಿ ಇಲಾಜು ಮಾಡಲಾಯಿತು. ಮೂರು ದಿನಗಳ ನಂತರ ಮಗುವನ್ನು ಮನೆಗೆ ಕರೆತರಲಾಯಿತು.

ಸೋಮವಾರ ಶ್ರೀಮತಿ ಪದ್ಮಾಟೀಚರ್‌ರವರು ಕೃಷ್ಣಮೂರ್ತಿಯ ಮನೆಯಲ್ಲಿ ತಾಯಿ–ಮಗಳ ಸಮ್ಮುಖದಲ್ಲಿ ಹಾಗೂ ಅವನ ಒಂದಿಬ್ಬರು ಸಹೋದ್ಯೋಗಿ ಅಧ್ಯಾಪಕರ ಎದುರಿನಲ್ಲಿ ವಿಚಾರಣೆ ನಡೆಸಿದರು. ಮೊದ ಮೊದಲು "ನಾನೇನು ಅಂಥ ಕೆಲಸ ಮಾಡಿಲ್ಲ." ಎಂದು ಸಾಧಿಸಲು ಪ್ರಯತ್ನಿಸಿದ ಅಧ್ಯಾಪಕ, ಮಗುವು ನಡೆದುದೆಲ್ಲವನ್ನು ವಿವರವಾಗಿ ಹೇಳಿದಾಗ ಒಮ್ಮೆಲೆ ಅಲ್ಲಿದ್ದವರ ಕಾಲು ಹಿಡಿದು "ನನಗೆ ಹೊಸ ಜನ್ಮ ಕೊಡಿ. ನಾನು ಮಾಡಬಾರದ ಅಕೃತ್ಯ ಮಾಡಿದ್ದೇನೆ. ಹೊಟ್ಟೆಯಲ್ಲಿ ಹಾಕಿಕೊಂಡು ಕ್ಷಮಿಸಿ" ಎಂದು [illegible] ಗೋಗರೆದ. ಇಷ್ಟೆಲ್ಲ ನಡೆಯುತ್ತಿರುವಾಗ ಗಲಾಟೆ ಸದ್ದು ಕೇಳಿದ ಹಲವು ನಾಗರೀಕರು ಅಲ್ಲಿಗೆ ಧಾವಿಸಿದರು. ರೊಚ್ಚಿಗೆದ್ದ ಅವರು ಅಧ್ಯಾಪಕನಿಗೆ ಹೊಡೆಯುವ ಬೆದರಿಕೆಯ ಮಾತಾಡತೊಡಗಿದರು. ಅಷ್ಟೊತ್ತಿಗೆ ರಾಘವೇಂದ್ರಾಚಾರ್ ಮತ್ತು ಶಿವಕುಮಾರ್ ಮುಂತಾದವರು ಅಲ್ಲಿಗೆ ಬಂದು ಜನರನ್ನು ಸಮಾಧಾನ ಮಾಡಿ, ಅಧ್ಯಾಪಕನನ್ನು ಪದ್ಮಾಟೀಚರ್ ಮನೆಗೆ ಕರೆದೊಯ್ದು "ಮುಂದೇ ಮಗ ಕೆಲಸ ಕಳೆದು ಕೊಳ್ಳುತ್ತಾನೆ. ಆದ್ದರಿಂದ ಪೋಲಿಸ್ ಕಂಪ್ಲೇಂಟ್ ಇತ್ಯಾದಿ ಕೊಡುವುದು ಬೇಡ. ಹುಡುಗಿಗೆ 10 ಸಾವಿರ ರೂಪಾಯಿಗಳನ್ನು ಪರಿಹಾರ ಕೊಡಲಿ." ಎಂದು ಡಿಮಾಂಡ್ ಮಾಡಿದರು. ಇದಕ್ಕಾಗಿ ಒಂದು ಸಮಿತಿಯು ಸ್ಥಳದಲ್ಲೇ ರಚನೆಯಾಯಿತು. 10 **ಸಾವಿರವು ಚೌಕಾಸಿಗೊಳಗಾಗಿ ಕೊನೆಗೆ 3 ಸಾವಿರ ರೂಪಾಯಿಗಳಿಗೆ ಇತ್ಯರ್ಥವಾಯಿತು**. ಆದರೆ ಬಾಲಕಿಯ ತಾಯಿ ಹೇಳುತ್ತಾರೆ "ನನಗೆ ಯಾವ ಹಣವೂ ಬೇಡ. ಹೋದ ಮರ್ಯಾದೆ ಹಣದಿಂದ ಬರುವುದಿಲ್ಲ. ಮತ್ತೊಂದು ಬಾರಿ ನನ್ನ ಮಗುವಿಗೆ ಹೀಗೆ ಮಾಡದಿದ್ದರೆ ಸಾಕು." ಎಂದರು.

ಇವೆಲ್ಲ ಜನಸಮುದಾಯ ದಿಂದ ಸಂಗ್ರಹಿಸಿದ ಮಾಹಿತಿಗಳಾಗಿವೆ.

ಬಾಲಕಿಯ ಮೇಲೆ ನಡೆಸಿದ ಇಂಥ ಅಮಾನುಷ ಅತ್ಯಾಚಾರವನ್ನು ನೀತಿಯನ್ನು ಗಾಳಿಗೆ ತೂರುವ ಈ ಪ್ರವೃತ್ತಿಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಖಂಡಿಸುತ್ತದೆ. ಪೋಲಿಸರು ಸಂಬಂಧಪಟ್ಟ ಅಧ್ಯಾಪಕರನ್ನು ಬಂಧಿಸಿ ವಿಚಾರಣೆಗೆ ಗುರಿಮಾಡಿ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಬಯಸುತ್ತೇವೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿ,
ಭದ್ರಾವತಿ ಶಾಖೆ.

## ಎಳೆಯ ಕಲಾವಿದರಿಂದ
# ಕೊಪ್ಪದಲ್ಲೊಂದು ಸಂಗೀತ ಸಂಜೆ

ತಾ. ೫-೫-೬೩ ರಂದು ಸಂಜೆ ಶಂಕರ್ ಕಂಪನಿ ಆವರಣದಲ್ಲಿ ಕರ್ನಾಟಕ ಸಂಘ ಹಾಗೂ ಬ್ಯಾಂಕರ್ಸ್ ರಿಕ್ರಿಯೇಷನ್ ಕ್ಲಬ್‌ಗಳ ಜಂಟಿ ಆಶ್ರಯದಲ್ಲಿ ಉಡುಪಿಯ ಬಾಲಗಾನ ಮೇಳದವರಿಂದ ಒಂದು ಸಂಗೀತ ಕಾರ್ಯಕ್ರಮ ನಡೆಯಿತು.

ಶಾಸ್ತ್ರೀಯ ಸಂಗೀತ ಮಲೆನಾಡಿನಲ್ಲಿ ಅಪರೂಪದ ವಸ್ತುವಾಗಿ ಬಿಟ್ಟಿದೆ. ನಮ್ಮ ಅಭಿರುಚಿಯೆಲ್ಲ ಆರ್ಕೆಸ್ಟ್ರಾ ನಾಮಕವಾದ ಸಿನಿಮಾ ಸಂಗೀತದ ಕೆಟ್ಟ ಅನುಕರಣೆಗೆ ಮಾತ್ರ ಸೀಮಿತವಾದದ್ದು. ಅಂಥಲ್ಲಿ ಉಡುಪಿಯ ಬಾಲಮೇಳದವರು ಒಂದಿಷ್ಟು ಶಾಸ್ತ್ರೀಯ ಸಂಗೀತ ಹಾಡಿಯೂ ಜನರನ್ನು ಹಿಡಿದಿಟ್ಟದ್ದು ಅವರ ನಿಜವಾದ ಸಾಧನೆ.

ಕೊಪ್ಪದ ಪಾಲಿಗೆ ಬರಿ ತೆಲುಗು ಸಂಗೀತವೇ. ಅಥವಾ ಅದರ ಸಾಟಿಸ್ಯ ಸಂಸ್ಕೃತದ್ದು. ...

ಕೊಪ್ಪದ ಮಾಸದಲ್ಲಿ ಕಾರ್ಯಕ್ರಮಕ್ಕೆ 'ಬೇಕಾದ ಹಾಗೆ' ಜನ ಸೇರಿದ್ದರು. ಆದರೆ ಅಪೊತ್ತು ಕಾರ್ಯಕ್ರಮ ನಡೆದ ಆವರಣ ಇಂಥ ಕಾರ್ಯಕ್ರಮಗಳಿಗೆ ಅಷ್ಟೇನೂ ಸೂಕ್ತವಾದ್ದಲ್ಲ. ಒಂದು ಕಡೆಯಿಂದ ಅತ್ತಿತ್ತ ಹೋಗುವ ಬಸ್ಸು ಕಾರುಗಳ ಶಬ್ದ, ಇನ್ನೊಂದು ಕಡೆ ಬೇಕಾಬಿಟ್ಟಿಯಾಗಿ ಬಂದು ಕೂರುವ, ಮಧ್ಯೆ ಎದ್ದು ಹೋಗುವ ಜನರು ಇವುಗಳ ನಡುವೆ ಕಾರ್ಯಕ್ರಮದ ಗಾಂಭೀರ್ಯ ಕಡಿಮೆಯಾಯಿತು. ಕಲಾವಿದರ ಮಾನಸಿಕ ಸ್ಥಿತಿ ಕಾರ್ಯಕ್ರಮದ ಮೂಲಾಧಾರವಾಗಬೇಕಾದ ಇಂಥ ಕಡೆ ನಮ್ಮ ಜನ ಹೀಗೆ ಬೇಕಾಬಿಟ್ಟಿಯಾಗಿ ಹೋಗಿ ಬಂದು ಮಾಡುವುದನ್ನು ನಿಲ್ಲಿಸಿದರೆ ಒಳ್ಳೆಯದು.

ಮುಖ್ಯವಾಗಿ ಕಾರ್ಯಕ್ರಮದ ಕೊನೆಯ ಹೊತ್ತಿಗೆ ಹಾಡಿದ 'ನಾಯಿ ನರಿ, ನಾಯಿ ನರಿ, ತಿಂಡಿಬೇಕೆ'ಯನ್ನು ನಾವು ಗಮನಿಸಬೇಕು. ದಕ್ಷಿಣಾದಿ ಸಂಗೀತ ಕನ್ನಡಿಗರ ಪಾಲಿಗೆ ಬರಿ ತೆಲುಗು ಸಂಗೀತವೇ. ಅಥವಾ ಅದರ ಸಾಹಿತ್ಯ ಸಂಸ್ಕೃತದ್ದು. 'ನಾವು ಕನ್ನಡದಲ್ಲೂ ಹಾಡಬಲ್ಲೆವು' ಎಂದು ಸಾಧಿಸುವುದಕ್ಕೆ ಕಾರ್ಯಕ್ರಮದ ಕೊನೆಗೆ ದಾಸರ ಯಾವುದಾದರೊಂದು ದೇವರ ನಾಮ ಹಾಡಿ ಮುಗಿಸುವುದೇ ಸಾಮಾನ್ಯ ಪದ್ಧತಿ. ಇದಲ್ಲದೆ, ಸಾಹಿತ್ಯ ಯಾವ ಭಾಷೆಯದೇ ಇರಲಿ, ಅದು ನೂರಕ್ಕೆ ತೊಂಬತ್ತು ಭಾಗ ಅಥವಾ ನೂರೂ ಭಾಗ ಬೇರೆ ಬೇರೆ ದೇವರ ಹೆಸರುಗಳ ಹಿಂದೆ ಬೇರೆ ಬೇರೆ ವಿಶೇಷಣಗಳನ್ನು ಸೇರಿಸಿದ ಕೇವಲ ಭಕ್ತಿರಸಕ್ಕೆ ಸಂಬಂಧಪಟ್ಟ ಕೃತಿಗಳು. ಈ ಹಿನ್ನೆಲೆಯಲ್ಲಿ, ಹಾಡಿದ ಮಕ್ಕಳ ಮನಸ್ಸಿಗೆ ಅರ್ಥವಾಗುವಂತಹುದಾಗಿ ಪರಿಣಾಮಕಾರಿಯಾಗುವ, ಭಕ್ತಿಯಿಲ್ಲದೆ ಬೇರೊಂದು ಭಾವಕ್ಕೆ ಸಂಬಂಧಿಸಿದ ನಾಯಿ ನರಿ ಖಂಡಿತವಾಗಿ ಸ್ವಾಗತಾರ್ಹವಾದದ್ದು.

ಗೋಕಾಕ್ ವರದಿಯ ಪರವಾದ ಚಳುವಳಿ ನಾಡಿನಾದ್ಯಂತ ಹಬ್ಬಿ ನಿಸ್ಸಂಶಯವಾಗಿ ಕೊಪ್ಪದಲ್ಲೂ ಪ್ರತಿಧ್ವನಿಸಿದಾಗಲೂ ತನ್ನ ದೀರ್ಘನಿದ್ರೆಯಿಂದೇಳದ ಕರ್ನಾಟಕ ಸಂಘ, ಈ ಕಾರ್ಯಕ್ರಮದ ಮೂಲಕ ತನಗೆ ಜೀವ ಇರುವುದನ್ನು ಸಾಬೀತು ಪಡಿಸಲು ಪ್ರಯತ್ನಿಸಿದೆ. ಅದರ ಮತ್ತು ಬ್ಯಾಂಕರ್ಸ್ ಅಸೋಸಿಯೇಷನ್‌ನವರ ಶ್ರಮ ಖಂಡಿತವಾಗಿ ಸಾರ್ಥಕವಾದದ್ದು.

—ನಕ್ಷತ್ರಿಕ

## ಕಲಾರಂಗ

ಬಾಲಮೇಳದವರು ತುಂಬ ಬುದ್ಧಿವಂತಿಕೆಯಿಂದಲೇ ಕಾರ್ಯಕ್ರಮದ ಸ್ವರೂಪವನ್ನು ರೂಪಿಸಿದ್ದಾರೆ. ಕೇವಲ ಶಾಸ್ತ್ರೀಯವಲ್ಲದೆ, ಸುಗಮ ಸಂಗೀತ, ದೇಶಭಕ್ತಿ ಗೀತೆಗಳನ್ನೂ ಹಾಡುತ್ತಾರೆ. ಇದರೊಂದಿಗೆ, ಒಗಟು ಬಿಡಿಸುವ ಹಾಡಿನ ಮೂಲಕ ನೇರವಾಗಿ ಮಕ್ಕಳನ್ನು ಪ್ರೇಕ್ಷಕರನ್ನಾಗಿ ಹಿರಿಯರನ್ನು ತಮ್ಮೊಂದಿಗೆ ಸೇರಿಸಿಕೊಳ್ಳುತ್ತಾರೆ. ಹೀಗೆ ಸಂಯೋಜಕರ ವ್ಯಾವಹಾರಿಕ ಜಾಣ್ಮೆ ಸಹ ಕಾರ್ಯಕ್ರಮದ ಯಶಸ್ಸಿನ ಮುಖ್ಯ ಗುಟ್ಟು.

ಚಿಕ್ಕ ವಯಸ್ಸಿನ ಮಕ್ಕಳು ಖಂಡಿತವಾಗಿ ಚೆನ್ನಾಗಿ ಅಭ್ಯಾಸ ಮಾಡಿದ್ದಾರೆ. ತೀರ ಸೂಕ್ಷ್ಮ ಗಾಯಕಿಗಳಿಗೆ ಮಕ್ಕಳು ಕಲಿತ ಪಾಠವನ್ನಷ್ಟೇ ಒಪ್ಪಿಸುತ್ತಿದ್ದಾರೆ ಎಂಬ ಭಾವನೆ ಬಂದರೂ, ಮಕ್ಕಳ ಕಾರ್ಯಕ್ರಮವನ್ನು ಅವರ ಶಕ್ತಿಯ ಮಿತಿಯನ್ನೂ ಗಮನದಲ್ಲಿಟ್ಟುಕೊಂಡು ವಿಮರ್ಶಿಸುವುದು ಸರಿಯಾದ ಮಾರ್ಗ.

## ಗೋಕಾಕ್ ವರದಿ:
### ಸರ್ಕಾರದ ತೀರ್ಮಾನಕ್ಕೆ ಸಿ.ಪಿ.ಐ ರಾಜ್ಯ ಸಮಿತಿ ಬೆಂಬಲ

ಬೆಂಗಳೂರು: ಗೋಕಾಕ್ ಸಮಿತಿಯ ಶಿಫಾರಸುಗಳನ್ನು ಕುರಿತು ಸರ್ಕಾರ ನಿರ್ಧಾರ ತೆಗೆದುಕೊಳ್ಳುವ ಮೊದಲು ವಿರೋಧ ಪಕ್ಷಗಳ ಮತ್ತು ಅಲ್ಪ ಸಂಖ್ಯಾತರ ಪ್ರತಿನಿಧಿಗಳ ಜೊತೆ ಚರ್ಚಿಸಿದ್ದು, ಕರ್ನಾಟಕದಲ್ಲಿರುವ ಕನ್ನೇತರರ ಹಕ್ಕು-ಹಿತಾಸಕ್ತಿಗಳಿಗೆ ಚ್ಯುತಿ ಬಾರದ ರೀತಿಯಲ್ಲಿ ಕನ್ನಡವನ್ನು ಎಲ್ಲ ಮಕ್ಕಳೂ ಕಲಿಯುವ ವ್ಯವಸ್ಥೆ ಮಾಡಿರುವುದರಿಂದ ಸರ್ಕಾರದ ನಿರ್ಧಾರವನ್ನು ಸ್ವಾಗತಿಸಲು ಭಾರತ ಕಮ್ಯೂನಿಸ್ಟ್ ಪಕ್ಷದ ರಾಜ್ಯ ಮಂಡಳಿ ಮೇ ೨೪ ರಿಂದ ೨೬ ರವರೆಗೆ ನಡೆದ ಸಭೆಯಲ್ಲಿ ತೀರ್ಮಾನಿಸಿದೆ.

# ಮಲೆನಾಡಿನಲ್ಲಿ ನೀರು ತೆರಿಗೆಯ
# ಜಾರಿ ಪರಿಶೀಲಿಸಲು ಸಮಿತಿ

ಕೊಪ್ಪ: ಮಲೆನಾಡಿನ ಕೆರೆಗಳ ಸ್ಥಿತಿಗತಿಗಳನ್ನು ಪರಿಶೀಲಿಸಿ, ಸರ್ಕಾರ ಈಗ ವಿಧಿಸಿರುವ ನೀರು ತೆರಿಗೆ ದರದ ಬಗ್ಗೆ ಸೂಕ್ತ ಬದಲಾವಣೆಗಳನ್ನು ಸೂಚಿಸಲು ಸರ್ಕಾರ ಈಚೆಗೆ ಸಮಿತಿಯೊಂದನ್ನು ರಚಿಸಿದೆ ಎಂದು ಜಿಲ್ಲಾಧಿಕಾರಿ ಪಿ. ಬಿ. ಮಹಿಷಿಯವರು 'ದೀವಟಿಗೆ'ಗೆ ತಿಳಿಸಿದರು.

ಪ್ರಮುಖವಾಗಿ ಶೃಂಗೇರಿ ತಾಲೂಕಿನಲ್ಲಿ ಈ ವರ್ಷ ವ್ಯಾಪಕವಾಗಿ ೭೪-೭೫ ರಿಂದ ೭೯-೮೦ ರವರೆಗಿನ ನೀರು ತೆರಿಗೆಯನ್ನು ವಸೂಲಿ ಮಾಡಲಾಗುತ್ತಿರುವ ಬಗ್ಗೆ ರೈತರು ತೀವ್ರ ಅಸಮಾಧಾನಗೊಂಡಿದ್ದು ಮೇ ೩ರಂದು ಧರಣಿಕೊಳ್ಳುವ ಬೇಗನೆ ದಾಮಯ್ಯನವರ ಹೆಚ್ಚುವರಿ ಮುತ್ತಿಗೆಯನ್ನೇ ಹಾಕಿದ್ದರು.

ಈಗ ಸಮಿತಿ ನೇಮಕವಾಗಿದ್ದರೂ ಹಳೆಯ ವಸೂಲಿಯನ್ನು ನಿಲ್ಲಿಸಲು ಆಜ್ಞೆಯೇನೂ ಬಂದಿಲ್ಲವೆಂದೂ ಮಹಿಷಿಯವರು ಹೇಳಿದರು.

# ಜಿಲ್ಲೆಯ ಪ್ರಗತಿ: ಮಹಿಷಿಗೆ ತೃಪ್ತಿ

ಹತ್ತಿರ ಹತ್ತಿರ ಎರಡು ವರ್ಷಗಳ ಕಾಲ ಜಿಲ್ಲೆಯ 'ಯಜಮಾನ'ರಾಗಿದ್ದು ಈಗ ರಾಜ್ಯ ಸರ್ಕಾರದಲ್ಲಿ ಉದ್ಯೋಗ ಮತ್ತು ತರಬೇತಿ ನಿರ್ದೇಶಕರಾಗಿ ಬಡ್ತಿ ಹೊಂದಿ ವರ್ಗವಾಗಿರುವ ಯುವಕ ಐ. ಎ. ಎಸ್. ಅಧಿಕಾರಿ ಪಿ.ಬಿ. ಮಹಿಷಿಯವರಿಗೆ, ತಮ್ಮ ಅಧಿಕಾರಾವಧಿಯಲ್ಲಿ ಜಿಲ್ಲೆಯಲ್ಲಿ ನಡೆದ ಜನೋಪಯೋಗಿ ಕೆಲಸಕಾರ್ಯಗಳು ಹಾಗೂ ಜಿಲ್ಲೆಯ ಪ್ರಗತಿ ತೃಪ್ತಿ ಕೊಟ್ಟಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆ (ಕೂಲಿಗಾಗಿ ಕಾಳು), ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಗಿರಿಜನ ಅಭಿವೃದ್ಧಿ ಯೋಜನೆ, ಗ್ರಾಮದ ಅಕ್ಟೋಬರಿಗೆ ಮುಗಿದ ತೀವ್ರ ಅಭಿವೃದ್ಧಿ ಯೋಜನೆ ಮುಂತಾದವುಗಳ ಮೂಲಕ ಬಡತನದ ರೇಖೆಗಿಂತ ಕೆಳಗಿರುವ ದುರ್ಬಲ ವರ್ಗದವರಿಗೆ (ಹರಿಜನಗಿರಿಜನರು, ಸಣ್ಣ, ಅತಿ ಸಣ್ಣ ರೈತರು, ಕೃಷಿ ಕಾರ್ಮಿಕರು, ಕುಶಲಕರ್ಮಿಗಳು ಇತ್ಯಾದಿ) ಸಹಾಯಧನ ಹಾಗೂ ಸಾಲ ಸೌಲಭ್ಯಗಳ ಮೂಲಕ ಅವರ ಜೀವನ ಮಟ್ಟ ಸುಧಾರಿಸಲು ತೀವ್ರವಾಗಿ ಯತ್ನಿಸಲಾಗಿದೆ ಎನ್ನುತ್ತಾರವರು. ಉದಾಹರಣೆಗೆ ಕೊಪ್ಪ ತಾಲೂಕೊಂದರಲ್ಲೇ ಕಳೆದ ವರ್ಷ ಸ. ಗ್ರಾ. ಅ. ಯೋಜನೆಯಲ್ಲಿ ೨೬ ಲಕ್ಷ ರೂ., ರಾ. ಗ್ರಾ. ಉ. ಯೋಜನೆಯಲ್ಲಿ ಸುಮಾರು ೩೦-೩೫ ಲಕ್ಷ ರೂ., ತೀ. ಅ. ಯೋಜನೆಯಲ್ಲಿ ೧೬ ಲಕ್ಷ ರೂ. ಗಳಷ್ಟು ಕಾರ್ಯಕ್ರಮ ನಡೆದಿದೆ.

ಬರೀ ಯೋಜನೆಗಳಿಗೆ ಮಂಜೂರಾತಿ ಕೊಡುವುದಷ್ಟೇ ಅಲ್ಲ, ನಡೆದ ಕೆಲಸವನ್ನು ಹೋಗಿ ನೋಡುತ್ತಿರುತ್ತಾರೆ. ... ಕೆಲಸ ನಡೆದಲ್ಲಿ ... ಪ್ರೋತ್ಸಾಹಿಸುತ್ತಾರೆ. ... ವಸ್ತುಗಳು, ... ಬೇಕೆಂದು ... ಅಥವಾ ... ಎಂದು ಅಧಿಕಾರಿಗಳಿಂದ ತಿಳಿದುಕೊಳ್ಳಲು ಪ್ರಯತ್ನಿಸುತ್ತಾರೆ... ಅವರ ಜೊತೆ ಕೆಲಸ ಮಾಡಿದವರ ಅಭಿಪ್ರಾಯ.

## ಜೈ ಜೈ ಕನ್ನಡ ತಾಯಿಗೆ ನಾವು ಹೊರಟೆವು ಜೈಲಿಗೆ

ವಸಂತಗೋಪುರದ ಗೋಡೆಯ ಕೆಡವಿ
ಮನಸು-ಮನಸುಗಳ ಸೇತುವೆ ಕಟ್ಟಿ
ಹೊಟ್ಟೆ ಕಿಚ್ಚುಗಳ ಅಡವಿಯ ತೊರೆದು
ಬಂದೆವು ನಾವು ಜೈಲಿಗೆ।
ಜೈ ಜೈ ಕನ್ನಡ ತಾಯಿಗೆ
ನಾವು ಹೊರಟೆವು ಜೈಲಿಗೆ॥

ಕಣ್ಣಲಿ ತುಂಬಿದೆ ಕನ್ನಡ ಕನಸು
ಒಡಲಲಿ ಸಿಡಿದಿದೆ ಬೆಂಕೀ ಚೆಂಡು
ಕಪ್ಪು ನೆಲದಲಿ ಕಪ್ಪು ನಿಶಾನೆಯ
ನಿಲ್ಲಿಸಿ ಮೈಲು-ಮೈಲಿಗೆ।
ಜೈ ಜೈ ಕನ್ನಡ ತಾಯಿಗೆ
ನಾವು ಹೊರಟೆವು ಜೈಲಿಗೆ

ಸ್ವಂತ ಮನೆಯಲೇ ತಾಯ ಬಂಧಿಸಿದ
ತಾಯಿಗ್ಗಂಡರ ಬಗ್ಗು ಬಡಿಯಲು
ಒರಟಿದೆ ಕನ್ನಡ ಮಕ್ಕಳ ದಂಡು
ಹೆದರದೆ ಗುಂಡೂ-ಗೋಲಿಗೆ
ಜೈ ಜೈ ಕನ್ನಡ ತಾಯಿಗೆ
ನಾವು ಹೊರಟೆವು ಜೈಲಿಗೆ॥

—ಚಂದ್ರಶೇಖರ ಪಾಟೀಲ

# ಕಿಗ್ಗ ದೇವಸ್ಥಾನಕ್ಕೆ ಲಕ್ಷ ರೂ.

(ಒಂದನೇ ಪುಟದಿಂದ)

ತಾ॥ ಅ॥ ಮಂಡಳಿ ವತಿಯಿಂದ ಸಲ್ಲಿಸಿದ, ದಕ್ಷಿಣ ಕನ್ನಡವನ್ನು ಸಂಪರ್ಕಿಸುವ ನೆಮ್ಮಾರು-ಕೆರೆಕಟ್ಟೆ ರಸ್ತೆ ನಿರ್ಮಾಣದ ಕೋರಿಕೆ ಪರಿಶೀಲಿಸುವುದಾಗಿ ನುಡಿದರು.

ಶೃಂಗೇರಿಯನ್ನು ದಕ್ಷಿಣ ಕನ್ನಡ ಜಿಲ್ಲೆಗೆ ೩೦ ಕಿ. ಮೀ. ಹತ್ತಿರವಾಗಿಸುವ ಈ ರಸ್ತೆಗೆ ೩ ಲಕ್ಷ ರೂ ವೆಚ್ಚದಲ್ಲಿ ೮ ಕಿ. ಮೀ. ಟಾರ್ ಆಗಿದ್ದು, ಇನ್ನು ೫ ಲಕ್ಷ ರೂ. ದುರಸ್ತಿಯಾಗಬೇಕಾಗಿದೆ ಎಂದು ಮನವಿಯಲ್ಲಿ ತಿಳಿಸಲಾಗಿತ್ತು.

ಇತಿಹಾಸ ಪ್ರಸಿದ್ಧ ಕಿಗ್ಗಾ ದೇವಾಲಯ ಕ್ಕೆ ೯೦೦ ಎಕರೆ ತರಿ ಹಾಗೂ ಬಾಗಾಯ್ತು ಭೂ ಪ್ರದೇಶ ಭೂ ಸುಧಾರಣೆಯಲ್ಲಿ ಕೈ ತಪ್ಪಿ ಹೋಗಿದ್ದು, ದೇವಾಲಯ ನಡೆಸಿಕೊಂಡು ಹೋಗುವುದು ಕಷ್ಟ ಎಂದು ಧರ್ಮದರ್ಶಿ ಕೆ. ಸಿ. ಶಿವಶಂಕರ್ ರಾವ್ ಮನವಿಯಲ್ಲಿ ಸೂಚಿಸಿದ್ದರು.

ದೇವಾಲಯದ ೩೨ ನೌಕರರು ಈಗಿನ ವೇತನದಿಂದ ಜೀವನ ನಡೆಸಲು ಅಸಾಧ್ಯವಾಗಿದ್ದು ವರ್ಷಕ್ಕೆ ಬರುತ್ತಿರುವ ೧೯ ಸಾವಿರ ರೂ. ತಸ್ತಿಕ್ ಹಣವನ್ನು ೬೫ ಸಾವಿರ ರೂ. ಗಳಿಗೆ ಏರಿಸಲೂ ಅವರು ಕೋರಿದ್ದರು.

ಮಂತ್ರಿ ಬೇಗಾನೆ ರಾಮಯ್ಯ, ಸಂಸತ್ ಸದಸ್ಯ ಡಿ. ಎಂ. ಪುಟ್ಟೇಗೌಡ ಮಾತನಾಡಿದರು.

ಅಚ್ಯುತ ರಾವ್ ಸ್ವಾಗತಿಸಿ ವಂದಿಸಿದರು.

ಶೃಂಗೇರಿಗೆ ಹೆಲಿಕ್ಯಾಪ್ಟರ್‌ನಲ್ಲಿ ಬಂದ ಮುಖ್ಯ ಮಂತ್ರಿಗಳು ಶಾರದಾ ಪೀಠ ಸಂದರ್ಶನದ ನಂತರ ಕಿಗ್ಗಕ್ಕೆ ಕಾರಿನಲ್ಲಿ ಬಂದು ಎರಡು ಗಂಟೆಗೆ ಹೊಸದುರ್ಗಕ್ಕೆ ತೆರಳಿದರು.

## ತಂದೆ ಮಕ್ಕಳ ಜಗಳ: ತಂದೆಯ ಕೊಲೆ

ಕೊಪ್ಪ: ನಿಲುವಾಗಿಲು ಬಳಿಯ ಬಿಲಗದ್ದೆಯಲ್ಲಿ ಮಂಜುನಾಥ ಅಲಿಯಾಸ್ ಪಾಪಣ್ಣ ಎಂಬುವನು ಕುಡಿದು ಮತ್ತನಾಗಿದ್ದ ತನ್ನ ತಂದೆ ಕಾಡಪ್ಪಗೌಡರ ಕಾಲು ಕಡಿದು ಕೊಲೆ ಮಾಡಿದ್ದಾಗಿ ಮಾ. ೬ರ ವರದಿಯ ಮೇರೆಗೆ ಕೊಪ್ಪ ಪೋಲಿಸರು ತನಿಖೆ ನಡೆಸಿ, ಆರೋಪಿಯನ್ನು ನ್ಯಾಯಾಂಗ ಸುಪರ್ದಿಗೆ ಒಪ್ಪಿಸಿದ್ದಾರೆ, ನ. ರಾ. ಪುರ ನ್ಯಾಯಾಧೀಶರು ಪ್ರಕರಣವನ್ನು ವಿಚಾರಣೆಗಾಗಿ ಚಿಕ್ಕಮಗಳೂರಿನ ಸೆಶನ್ಸ್ ಕೋರ್ಟಿಗೆ ಒಪ್ಪಿಸಿದ್ದಾಗಿ ತಿಳಿದು ಬಂದಿದೆ.

## ಜಿಲ್ಲೆಯ ಪ್ರಗತಿ: ಮುಹಿಷಿಗೆ ತೃಪ್ತಿ

(೩ನೇ ಪುಟದ ೬ನೇ ಕಾಲಂನಿಂದ)

ಮೃದು ಸ್ವಭಾವ. ನೌಕರರ ಮೇಲೆ ಕೂಗಾಡುವವರಲ್ಲ. ವಸ್ತು ಕಡಿಮೆಯಾದರೂ ಯಾರನ್ನೂ ಕಡೆಗಣಿಸುವವರಲ್ಲ. ಒಳ್ಳೆಯ ಮಾತಿನಲ್ಲೇ ಹೇಳಿ ಕೆಲಸ ಮಾಡಿಸುತ್ತಾರೆ. ಹಾಗೆಂದು ಕೆಲಸಗಳೇನೂ ಹಿಂದೆ ಬೀಳುವುದಿಲ್ಲ– ಎಂದು ಕೆಲವರು ಅಧಿಕಾರಿಗಳು ಹೇಳುತ್ತಾರೆ.

"ಜಿಲ್ಲೆಯಲ್ಲಿ ಕಾನೂನು ಮತ್ತು ಶಾಂತಿ ಪಾಲನೆ ಪರಿಸ್ಥಿತಿ ಅತ್ಯಂತ ಉತ್ತಮವಾಗಿದೆ. ಎಲ್ಲೂ ಯಾವುದೇ ಗಲಭೆಗಳೂ ಇಲ್ಲ. ಹಾಗೆಯೇ ಒಟ್ಟಾರೆ ಅಭಿವೃದ್ಧಿಗೆ ಜಿಲ್ಲೆಯಲ್ಲಿ ವಿಪುಲ ಅವಕಾಶ ಹಾಗೂ ತಕ್ಕ ವಾತಾವರಣಗಳಿವೆ." ಎನ್ನುವ ಮುಹಿಷಿಯವರ ದೃಷ್ಟಿಯಲ್ಲಿ "ಸಾರ್ವಜನಿಕ ಕೊಡುಗೆಗಳ ಮೂಲಕ ಸಾರ್ವಜನಿಕ ಉಪಯೋಗದ ಕೆಲಸ-ಕಾರ್ಯಗಳನ್ನು ಕೈಗೊಳ್ಳಲು ಮಲೆನಾಡಿನಲ್ಲಿ ಬೇಕಾದಷ್ಟು ಅವಕಾಶ ಇವೆ, ಜನರ ಸಹಕಾರ ಅಷ್ಟು ಚೆನ್ನಾಗಿದೆ."

ಪ್ರವಾಸೋದ್ಯಮ ಅಭಿವೃದ್ಧಿಗೂ ಜಿಲ್ಲೆಯಲ್ಲಿ ವ್ಯಾಪಕ ಅವಕಾಶವಿದೆಯೆನ್ನುತ್ತಾರೆ ಅವರು.

## ಹರಿಹರಪುರ ಪಂಚಾಯಿತಿ ಅಧ್ಯಕ್ಷರ ವಿರುದ್ಧ ಅಧಿಕಾರ ದಾಹದ ಆರೋಪ

ಹರಿಹರಪುರ: ಇಲ್ಲಿನ ಗ್ರಾಮ ಪಂಚಾಯಿತಿ ಸದಸ್ಯರೂ ವ್ಯವಸಾಯ ಸಹಕಾರ ಸಂಘದ ಡೈರೆಕ್ಟರರೂ ಆದ ಹೆಚ್. ಎಸ್. ಮಂಜುನಾಥ್‌ರವರು 'ದೀವಟಿಗೆ' ಗೆ ಕಳಿಸಿರುವ ಲಿಖಿತ ಹೇಳಿಕೆಯಲ್ಲಿ ಹರಿಹರಪುರ ಗ್ರಾಮ ಪಂಚಾಯಿತಿ ಅಧ್ಯಕ್ಷರ ವಿರುದ್ಧ ತೀವ್ರ ಆರೋಪಗಳನ್ನು ಮಾಡಿದ್ದಾರೆ.

"ಅಧ್ಯಕ್ಷರ ಭ್ರಷ್ಟಾಚಾರದ ಕೆಲವು ಮುಖಗಳನ್ನು ಸಾರ್ವಜನಿಕರ ಅವಗಾಹನೆಗೆ ತರಲು ಅಪೇಕ್ಷಿಸುತ್ತೇನೆ" ಎಂದಿರುವ ಅವರು, ಹರಿಹರಪುರ ಸೇವಾ ಸಹಕಾರ ಸಂಘದ ಅಧ್ಯಕ್ಷರನ್ನು ಪದಚ್ಯುತಗೊಳಿಸಿ ತಾವು ಆ ಸ್ಥಾನದಲ್ಲಿ ಅಧ್ಯಕ್ಷರಾಗಲು ಹಾಲೀ ಅಧ್ಯಕ್ಷರ ಮೇಲೆ ಹಲ್ಲೆಗೆ ಯತ್ನಿಸಿ ಬೆದರಿಕೆ ಹಾಕುತ್ತಿದ್ದಾರೆಂದು ದೂರಿದ್ದಾರೆ.

ಸ್ಥಳೀಯ ಪ್ರಾಥ ಶಾಲಾ ಉಪಾಧ್ಯಾಯರಾದ ರಾಘವೇಂದ್ರರಾವ್ ಎಂಬವರಿಗ ನಲ್ಲಿ ನೀರು ವಿವಾದದಲ್ಲಿ ಹಣ ಮೋಸ ಮಾಡಿ ವಂಚಿಸಿದ್ದಾರೆಂದು ಆಪಾದಿಸಿರುವ ಮಂಜುನಾಥ್, ಊರಿನ ದೊಡ್ಡ ವ್ಯಕ್ತಿಗಳ ಹಿತಾಸಕ್ತಿಗೆ ಮಣಿದು, ನಲ್ಲಿನೀರು ವ್ಯವಸ್ಥೆ ಹದಗೆಡಿಸಿ, ಜನರಿಗೆ ತೊಂದರೆ ಕೊಡುತ್ತಿದ್ದಾರೆಂದು ತಮ್ಮ ಹೇಳಿಕೆಯಲ್ಲಿ ತಿಳಿಸಿದ್ದಾರೆ.

ಊರಿನ ಆಡಳಿತ ವ್ಯವಸ್ಥೆಯಲ್ಲಿ ಗುಂಪುಗಾರಿಕೆ ನಡೆಸುತ್ತಾ, ಎಲ್ಲಾ ಕೆಲಸಗಳೂ ಮಂದಗತಿಯಲ್ಲಿ ಸಾಗುವಂತೆ ಮಾಡಿದ್ದಾರೆ. ಎಂದೂ ಆರೋಪಿಸಿರುವ ಮಂಜುನಾಥ್, ಈ ಎಲ್ಲ ನಡವಳಿಕೆಗಳ ಬಗ್ಗೆ ಪಂಚಾಯ್ತಿ ಕಾರ್ಯಸ್ತರು ಸಾರ್ವಜನಿಕರು ಗಮನಹರಿಸಬೇಕೆಂದು ಮನವಿ ಮಾಡಿದ್ದಾರೆ.

ಈ ಬಗ್ಗೆ ಅಧ್ಯಕ್ಷರ ಪ್ರತಿಕ್ರಿಯೆಯನ್ನು ನಿರೀಕ್ಷಿಸಲಾಗಿದೆ.

## ಬೊವನ್ನಾಪುರ ಜಾತ್ರೆ

ಬೊವನ್ನಾಪುರ: ಮೇ ೨ ಮತ್ತು ೩ ರಂದು ಇಲ್ಲಿನ ತ್ರಿಪುರಾಂತಕಿ ಅಮ್ಮನವರ ಜಾತ್ರೆಯು ವೈಭವದಿಂದ ನೆರವೇರಿತು. ಜಾತ್ರೆಯ ಅಂಗವಾಗಿ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಇಲ್ಲಿನ ಸಹ್ಯಾದ್ರಿ ಯುವಕ ಸಂಘದವರಿಂದ ನಾಟಕ ಮತ್ತು ಯಕ್ಷಗಾನ ಕಲಾ ಸಂಘದವರಿಂದ ಯಕ್ಷಗಾನ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಜಾತ್ರೆಯಲ್ಲಿ ಸಹಸ್ರಾರು ಜನ ಭಕ್ತಾದಿಗಳು ಭಾಗವಹಿಸಿದ್ದರು.

(ವರದಿ: ಹೆಚ್.ಎಂ. ಗೋಪಾಲ್)

## ಸಾಂಸ್ಕೃತಿಕ ಕಾರ್ಯಕ್ರಮ

ಮಡುವಿನ ಕೆರೆ: ಎಪ್ರಿಲ್ ೨೫ ರಂದು ಇಲ್ಲಿನ ಜ್ಯೋತಿ ಯುವಕ ಸಂಘದ ಆಶ್ರಯದಲ್ಲಿ ಮೇಗೂರಿನ ಪ್ರಸನ್ನ ಕುಮಾರ್ ಇವರಿಂದ ಕಥಾಕಾಲಕ್ಷೇಪ ಏರ್ಪಡಿಸಲಾಗಿತ್ತು. ಈ ಸಾಂಸ್ಕೃತಿಕ ಸಂದರ್ಭದ ಅಂಗವಾಗಿ ಸ್ಥಳೀಯರಿಂದ ಮತ್ತು ಸಂಘದ ಕಲಾವಿದರಿಂದ ವಿವಿಧ ಕಾರ್ಯಕ್ರಮ ನಡೆಯಿತು. ಉತ್ತಮ ಕಲಾವಿದರಿಗೆ ಪ್ರೋತ್ಸಾಹ ಬಹುಮಾನ ನೀಡಲಾಯಿತು.

(ವರದಿ: ಎಂ.ಜಿ. ಶಿವಶಂಕರ)

## ಬಾಲಗಾನ ಮೇಳದಿಂದ ಶೃಂಗೇರಿಯಲ್ಲಿಕಾರ್ಯಕ್ರಮ

ಶೃಂಗೇರಿ: ಉಡುಪಿಯ ಬಾಲಗಾನ ಮೇಳದವರಿಂದ ಶೃಂಗೇರಿ ಕಿರಿಯ ಪ್ರಾಥಮಿಕ ಶಾಲೆ ಆವರಣದಲ್ಲಿ ಮೇ ೭ ರಂದು ಸಂಗೀತ ಕಾರ್ಯಕ್ರಮ ನಡೆಯಿತು. ಫ್ಲಾಷ್ ಅಸೋಸಿಯೇಶನ್‌ನ ಆಶ್ರಯದಲ್ಲಿ ನಡೆದ ಈ ಕಾರ್ಯಕ್ರಮ ಬಹಳ ಜನ ಮೆಚ್ಚುಗೆ ಪಡೆಯಿತೆಂದು ತಿಳಿದು ಬಂದಿದೆ.

## ಮುಹಿಷಿಗೆ ಬೀಳ್ಕೊಡಿಗೆ

(ಒಂದನೇ ಪುಟದಿಂದ)

ಅವರು ಎಲ್ಲೇ ಹೋದರೂ ಜಿಲ್ಲೆಯ ಜನರನ್ನು ಮರೆಯದಿರಲಿ ಎಂದು ಮನವಿ ಮಾಡಿದರು.

ಮಲೆನಾಡಿನ ತಾಲ್ಲೂಕುಗಳ ಪೈಕಿ ಕೊಪ್ಪ ತಾಲ್ಲೂಕು ಹೆಚ್ಚು ಚಟುವಟಿಕೆಯಿಂದ ಕೂಡಿದೆ. ಜನ ಹೆಚ್ಚಿನ ಆಸಕ್ತಿಯಿಂದ ಸರ್ಕಾರದ ಕೆಲಸ ಅಥವಾ ಯೋಜನೆಗಳಲ್ಲಿ ಪಾಲ್ಗೊಳ್ಳುವರೆಂದು ಪ್ರಶಂಸಿಸಿದ ಜಿಲ್ಲಾಧಿಕಾರಿಗಳು, ತಾಲ್ಲೂಕಿನ ಪ್ರಗತಿಗೆ ಜನರ ಉತ್ಸಾಹವೇ ಕಾರಣ ಎಂದು ಹೇಳಿ, ತಾಲ್ಲೂಕಿನ ಜನತೆಗೆ ಸರ್ವತೋಮುಖ ಏಳಿಗೆಯನ್ನು ಹಾರೈಸಿದರು.

ಕ್ಷೇತ್ರಾಭಿವೃದ್ಧಿ ಅಧಿಕಾರಿ ಕೆ.ಬಾಲಣ್ಣಗೌಡ ವಂದನಾರ್ಪಣೆ ಮಾಡಿದರು.

## ಕಿಗ್ಗಕ್ಕೆ ಸರ್ಕಾರಿ ಆಸ್ಪತ್ರೆಯಾವಾಗ? ಮಂತ್ರಿಗಳನ್ನು ಕುರಿತು ಗ್ರಾಮಸ್ಥರ ಪ್ರಶ್ನೆ

ಕಿಗ್ಗ: ಶೃಂಗೇರಿಯಲ್ಲಿ ಮಾರ್ಚ್ ೧ ರಂದು ಪವರ್ ಟಿಲ್ಲರ್‌ಗಳ ವಿತರಣೆ ಮಾಡಿದ ಬೇಗಾನೆ ರಾಮಯ್ಯನವರು ಕಿಗ್ಗಕ್ಕೆ ಸರ್ಕಾರಿ ಆಸ್ಪತ್ರೆ ಮಂಜೂರು ಮಾಡಿಸುವುದಾಗಿ ಘೋಷಿಸಿದ್ದರು.

ಈ ಭರವಸೆ ಕಾರ್ಯರೂಪಕ್ಕೆ ಬರುವ ಯಾವ ಹಂತದಲ್ಲಿದೆ ಎಂದು ತಿಳಿಯ ಬಯಸುವ ಯಾವ ಕಿಗ್ಗಾ ಗ್ರಾಮಸ್ಥರು, ಊರಿನ ಬಗ್ಗೆ ಸಾಕಷ್ಟು ಕಳಕಳಿಯಿರುವ ಬೇಗಾನೆಯವರು ತಮ್ಮ ಅಧಿಕಾರಾವಧಿಯಲ್ಲೇ ಈ ಉಪಯುಕ್ತ ಕೆಲಸ ನಡೆಯುವಂತೆ ನೋಡಿಕೊಳ್ಳಲಿ ಎಂದು ಮಂತ್ರಿಗಳಿಗೆ ಜ್ಞಾಪಿಸಿದ್ದಾರೆ.

ಈ ಬಗ್ಗೆ, ಮಂತ್ರಿಗಳು ಇನ್ನೊಮ್ಮೆ ಕಿಗ್ಗ ಅಥವಾ ಶೃಂಗೇರಿಗೆ ಬಂದಾಗ ಗ್ರಾಮಸ್ಥರ ನಿಯೋಗ ಅವರನ್ನು ಭೇಟಿ ಮಾಡಿ ವಿಚಾರಿಸಲಿ ಎಂದು 'ದೀವಟಿಗೆ' ಸೂಚಿಸುತ್ತದೆ.

## ಜುಲ್ಮಾನೆ

ನ.ರಾ. ಪುರ: "ಅತಿ ವೇಗ ಹಾಗೂ ಅಜಾಗರೂಕತೆ" ಯಿಂದ ಬಸ್ ಓಡಿಸಿದ ಕ್ಕಾಗಿ ಉದಯ ಬಸ್ಸಿನ ನಿವೃತ್ತ ಚಾಲಕ ನಾರಾಯಣರಾಯರಿಗೆ ಇಲ್ಲಿನ ಪ್ರ. ದ. ನ್ಯಾಯಾಧೀಶರು ೧.೫೦೦ ರೂ, ಗಳ ದಂಡ ವಿಧಿಸಿ ತೀರ್ಪಿತ್ತಿದ್ದಾರೆ.

೯–೧೨–೮೧ ರಂದು ಸಿಗದಾಳು ಘಾಟಿಯಲ್ಲಿ ಬಸ್ ಅಪಘಾತಕ್ಕೀಡಾಗಿ ಮೂವರು ಮರಣಹೊಂದಿದ್ದರು. ಈ ಬಗ್ಗೆ ಕೊಪ್ಪ ಪೋಲೀಸರು ಮೊಕದ್ದಮೆ ಹೂಡಿದ್ದರು.

## ಶೃಂಗೇರಿ ಬಳಿ ಮಹಿಳೆ ಕೊಲೆಗೆ ಯತ್ನ

ಶೃಂಗೇರಿ: ಇಲ್ಲಿಗೆ ಸಮೀಪದ ಆನೆಗುಂದ ಅಗ್ರಹಾರದಲ್ಲಿ ಮಹಿಳೆಯೊಬ್ಬರ ಕೊಲೆಗೆ ಯತ್ನ ನಡೆದಿರುವುದಾಗಿ ತಿಳಿದು ಬಂದಿದೆ. ಮಹಿಳೆ ಪ್ರಾಣಾಪಾಯದಿಂದ ಪಾರಾಗಿದ್ದು ಈ ಸಂಬಂಧ ಶೃಂಗೇರಿ ಪೋಲೀಸರು ಕೆಲವರನ್ನು ಬಂಧಿಸಿದ್ದಾರೆಂದು ಗೊತ್ತಾಗಿದೆ. ಆಭರಣ ದೋಚುವ ಯತ್ನ ಇದೆಂದು ಹೇಳಲಾಗಿದೆ. (ಹೆಚ್ಚಿನ ವಿವರ ಮುಂದಿನ ಸಂಚಿಕೆಯಲ್ಲಿ)

## "ಮಟ್ಕ, ಜೂಜು, ಗಂಧಕಳವು ನಿಂತಿವೆ"

### ಕೊಪ್ಪ ಸರ್ಕಲ್ ಇನ್ಸ್‌ಪೆಕ್ಟರ್ ಹೇಳಿಕೆ

ಕೊಪ್ಪ ಸರ್ಕಲ್ ಇನ್ಸ್‌ಪೆಕ್ಟರ್ ಟಿ.ವಿ. ಹೊನ್ನಗಿರಿಯಯ್ಯ ಅವರನ್ನು ಈಚೆಗೆ ಭೇಟಿ ಮಾಡಿದ್ದ 'ದೀವಟಿಗೆ' ಸಂಪಾದಕರೊಂದಿಗೆ ಅವರು ಮಾತಾಡುತ್ತ, "ಕೊಪ್ಪ ಸರ್ಕಲ್‌ನಲ್ಲಿ ಯಾವುದೇ ಶಾಂತಿ ಭಂಗದ ಚಳುವಳಿಗಳು ನಡೆಯುತ್ತಿಲ್ಲ. ಮಟ್ಕಾ, ಜೂಜು ವಗೈರೆ ಸಂಪೂರ್ಣ ನಿಂತಿರುತ್ತೆ. ಗಂಧದ ಕಳ್ಳರನ್ನು ಹಿಡಿದ ಬಂದೀಖಾನೆಗೆ ಕಳಿಸಿದ್ದರ ಮೇಲೆ ಈಗ ಸರ್ಕಲಿನಲ್ಲಿ ಗಂಧದ ಕಳ್ಳತನ ಸಂಪೂರ್ಣ ನಿಂತಿರುತ್ತೆ" ಎಂದು ತಿಳಿಸಿದ್ದಾರ. ಇದೆಲ್ಲ ತಮ್ಮ ಮತ್ತು ತಮ್ಮ ಸಿಬ್ಬಂದಿಯ ಶ್ರಮದ ಫಲ ಎಂದಿರುವ ಅವರು ನಿಷ್ಠಾವಂತ ಅಧಿಕಾರಿಗಳಿಗೆ ಸಾರ್ವಜನಿಕರು ಸಹಕಾರ-ಸಹಾನುಭೂತಿ ತೋರಿಸಬೇಕೆಂದು ಮನವಿ ಮಾಡಿದ್ದಾರೆ.

ಸಂಪಾದಕ, ಪ್ರಕಾಶಕ ಮತ್ತು ಮುದ್ರಕ:
**ಸಿರಿಮನೆ ನಾಗರಾಜ್**
ಅಚ್ಚು: ನೇಸರ ಮುದ್ರಣ, ಕೊಪ್ಪ